KA / :G-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಮೇ ೨೬, ೨೦೧೧ (ಜೇಷ್ಠ ೫, ಶಕ ವರ್ಷ ೧೯೩೩) | ಸಂಚಿಕೆ ೨೧ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ವಾಕೈ 21 ರೇಸೇವಿ 2010, ಬೆಂಗಳೂರು, ದಿನಾಂಕ:12.05.2011**

ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ಹಾಗೂ ತಿದ್ದುಪಡಿ ನಿಯಮಗಳು 2007ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಮುಖಾಂತರ ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ 34 ಆರ್‌ಟಿಬಿ 2009, ದಿನಾಂಕ:04.02.2010ರ ಅನ್ವಯ ರೇಷ್ಮೆ ಇಲಾಖೆಗೆ ರೇಷ್ಮೆ ವಿಸ್ತರಣಾಧಿಕಾರಿಗಳಾಗಿ ಆಯ್ಕೆಗೊಂಡ ಅಭ್ಯರ್ಥಿಗಳ ಪೈಕಿ ಒಬ್ಬರಾದ ಈ ಕೆಳಕಂಡ ಅಭ್ಯರ್ಥಿಯನ್ನು ರೂ.10800–300–12300–350–14400–400–16800–450–19500–525–20025ರ ವೇತನ ಶ್ರೇಣಿಯಲ್ಲಿ ರೇಷ್ಮೆ ವಿಸ್ತರಣಾಧಿಕಾರಿ ಹುದ್ದೆಯಲ್ಲಿ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರವು ನೇಮಿಸಿದೆ. ಮತ್ತು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರ ಹೆಸರಿನ ಮುಂದೆ ಸೂಚಿಸಿರುವ ಸ್ಥಳಕ್ಕೆ ನಿಯುಕ್ತಿಗೊಳಿಸಿದೆ.

| ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಸ್ಥಳ ನಿಯುಕ್ತಿಗೊಳಿಸಿ ನೇಮಿಸಿರುವ ಹುದ್ದೆ |
|---|---|
| ಶ್ರೀ ಎಸ್. ಸಿದ್ದರಾಜು ಬಿನ್ ಶಿವಣ್ಣ, ಕೆಬ್ಬೇಹುಂಡಿ, ವ್ಯಾಸರಾಜಪುರ ಅಂಚೆ, ಟಿ.ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ. | ತಾಂತ್ರಿಕ ಸೇವಾ ಕೇಂದ್ರ, ಕೆ.ಆರ್.ನಗರ, ಮೈಸೂರು ಜಿಲ್ಲೆ. |

**ಷರತ್ತುಗಳು:**

1) ಈ ಅಭ್ಯರ್ಥಿಯನ್ನು ರೂ.10800–300–12300–350–14400–400–16800–450–19500–525–20025ರ ವೇತನ ಶ್ರೇಣಿ ಬಿ. ವೃಂದದ ರೇಷ್ಮೆ ವಿಸ್ತರಣಾಧಿಕಾರಿ ಹುದ್ದೆಗೆ ಎರಡು ವರ್ಷಗಳ ಕಾಲ ಪರೀಕ್ಷಾರ್ಥಿಯಾಗಿ (on probation) ನೇಮಕಾತಿ ಮಾಡಲಾಗಿದೆ. ಈ ಅಭ್ಯರ್ಥಿಯ ನೇಮಕಾತಿ ತಾತ್ಕಾಲಿಕವಾಗಿರುತ್ತದೆ.
2) ಸದರಿ ನೇಮಕಾತಿ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮ/ ಆದೇಶಗಳ ಅಧೀನಕ್ಕೊಳಪಟ್ಟಿರುತ್ತದೆ.
3) ಈ ಅಭ್ಯರ್ಥಿಯು 1977ರ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಾವಳಿಗೆ ಬದ್ಧರಾಗಿ ಪರೀಕ್ಷಾರ್ಥ ಅವಧಿಯೊಳಗಾಗಿ ಸದರಿ ಹುದ್ದೆಗೆ ನಿಗದಿಪಡಿಸಿದ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು.
4) ಆಯ್ಕೆಯಾಗಿರುವ ಅಭ್ಯರ್ಥಿಗಳ ನೇಮಕಾತಿಯು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ:5442/2009ರ ಹಾಗೂ ಇತರೆ ನ್ಯಾಯಾಲಯಗಳ ಆದೇಶಗಳು ಯಾವುದಾದರೂ ಇದ್ದಲ್ಲಿ ಅದರ ಅಂತಿಮ ತೀರ್ಮಾನಕ್ಕೊಳಪಟ್ಟಿರುತ್ತದೆ.
5) ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಯು 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆ ನಿಯಮಾವಳಿಯಲ್ಲಿ ಮೇಲ್ಕಂಡ ಹುದ್ದೆಗೆ ನಿಗದಿಪಡಿಸಿರುವ ಕನ್ನಡ ಭಾಷಾ ಮತ್ತು ಇಲಾಖಾ ಪರೀಕ್ಷೆಯಲ್ಲಿ ಉತ್ತೀರ್ಣರಾಗತಕ್ಕದ್ದು.
6) ಅಭ್ಯರ್ಥಿಯ ಜೇಷ್ಠತೆಯನ್ನು ಕರ್ನಾಟಕ ಲೋಕಸೇವಾ ಆಯೋಗದ ಆಯ್ಕೆ ಪಟ್ಟಿಯಲ್ಲಿ ರೂಪಿಸಿರುವ ಕ್ರಮ ಸಂಖ್ಯೆಯಂತೆ ಹಾಗೂ ಸರ್ಕಾರ ಆಗಿಂದಾಗ್ಗೆ ಹೊರಡಿಸಿರುವ ಆದೇಶಾನುಸಾರ ನಿರ್ಧರಿಸಲಾಗುವುದು.
7) ನೇಮಕಾತಿ ಅಧಿಸೂಚನೆಯನ್ನು ನೊಂದಾಯಿತ ಅಂಚೆ ಮೂಲಕ ಸ್ವೀಕರಿಸಿದ 15 ದಿನಗಳೊಳಗಾಗಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು–1, ಇವರ ಬಳಿ ಕಾರ್ಯವರದಿ

ಮಾಡಿಕೊಳ್ಳತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ತನ್ನಷ್ಟಕ್ಕೆ ತಾನೇ ರದ್ದಾಗಲಿದ್ದು ಮುಂದೆ ಅಭ್ಯರ್ಥಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ಸರ್ಕಾರವು ಮಾಡುವುದಿಲ್ಲ ಮತ್ತು ಅಭ್ಯರ್ಥಿಯು ಸರ್ಕಾರದೊಂದಿಗೆ ಪತ್ರ ವ್ಯವಹಾರ ಮಾಡಿದಲ್ಲಿ ಅದನ್ನು ಪರಿಗಣಿಸುವುದಿಲ್ಲ.

8) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಮೇಲ್ಕಂಡ ಅಭ್ಯರ್ಥಿಗೆ ಕಾಲಕಾಲಕ್ಕೆ ಅವಶ್ಯವಿರುವ ತರಬೇತಿ/ ಕಾರ್ಯಶಿಬಿರ, ಇತ್ಯಾದಿಗಳಿಗೆ ನಿಯೋಜಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.199

**ಬಿ.ಡಿ ಓಬಪ್ಪ**

ಸರ್ಕಾರದ ಉಪ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ರೇಷ್ಮೆ & ಸಕ್ಕರೆ)

## ನೋಂದಣಿ ಮತ್ತು ಮುದ್ರಾಂಕ ಇಲಾಖೆ
## ಜಿಲ್ಲಾ ನೊಂದಣಾಧಿಕಾರಿಗಳ ಕಛೇರಿ, ಬಳ್ಳಾರಿ
## ಅಧಿಕೃತ ಜ್ಞಾಪನ
### ಸಂಖ್ಯೆ: ಸಿಬ್ಬಂದಿ/12/2009-10, ದಿನಾಂಕ:19.05.2011

**ವಿಷಯ:** ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾದ ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ನೇಮಕಾತಿ ಆದೇಶವನ್ನು ರದ್ದುಗೊಳಿಸುವ ಕುರಿತು.

**ಉಲ್ಲೇಖ:** 1) ಕಾರ್ಯದರ್ಶಿಯವರು ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಅವರ ಪತ್ರ ಸಂಖ್ಯೆ:ಇ(3) 764-823/2009-10/ಪಿಎಸ್ಸಿ, ದಿನಾಂಕ:25.07.2009/ 03.08.2009.

2) ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಪತ್ರ ಸಂಖ್ಯೆ: ಸಿಬ್ಬಂದಿ 2-144/05-06, ದಿನಾಂಕ:24.08.2009.

3) ಈ ಕಛೇರಿಯ ಇದೇ ಸಂಖ್ಯೆಯ ಅಧಿಕೃತ ಜ್ಞಾಪನ ಪತ್ರ ದಿನಾಂಕ:06.03.2010.

4) ಈ ಕಛೇರಿಯ ಇದೇ ಸಂಖ್ಯೆಯ ಅಧಿಕೃತ ಜ್ಞಾಪನ ಪತ್ರ ದಿನಾಂಕ:25.08.2010.

ಕರ್ನಾಟಕ ಲೋಕಸೇವಾ ಆಯೋಗದಿಂದ ದ್ವಿತೀಯ ದರ್ಜೆ ಸಹಾಯಕ ಹುದ್ದೆಗೆ ಆಯ್ಕೆಯಾಗಿ ಉಲ್ಲೇಖ (2)ರನ್ವಯ ಈ ಜಿಲ್ಲೆಗೆ ಹಂಚಿಕೆಯಾಗಿರುವ ಈ ಕೆಳಕಂಡ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 4(i) ರನ್ವಯ ಷರತ್ತುಗಳಿಗೆ ಒಳಪಡಿಸಿ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರಾಗಿ ವೇತನ ಶ್ರೇಣಿ ರೂ.5800-10500ರಲ್ಲಿ ನೇಮಕ ಮಾಡಿ ಅವರ ಹೆಸರಿನ ಮುಂದೆ ತೋರಿಸಲಾದ ಕಛೇರಿಗೆ ಸ್ಥಳ ನಿಯುಕ್ತಿಗೊಳಿಸಿ ಉಲ್ಲೇಖ (3)ರಲ್ಲಿ ಆದೇಶಿಸಲಾಗಿತ್ತು.

| ಕ್ರ ಸಂ. | ಹೆಸರು ಮತ್ತು ವಿಳಾಸ ಶ್ರೀ/ ಶ್ರೀಮತಿ | ಕೆಪಿಎಸ್‌ಸಿ ಆಯ್ಕೆ ಪಟ್ಟಿಯ ಕ್ರಮ ಸಂಖ್ಯೆ | ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿದ ಕಛೇರಿ |
|---|---|---|---|
| 1. | ಶ್ರೀ ಪ್ರವೀಣ್ ಕುಮಾರ್ ಹನ್ನಿ, ತಂದೆ ವೀರಪ್ಪ ಹನ್ನಿ, ರೇಣುಕಾ ನಗರ, ಹೂವಿನಹಡಗಲಿ, ಬಳ್ಳಾರಿ ಜಿಲ್ಲೆ. | 33 (ನೋಂದಣಿ ಸಂಖ್ಯೆ: 663208) | ಉಪ ನೋಂದಣಿ ಕಛೇರಿ, ಕುರುಗೋಡು. |

ಅಭ್ಯರ್ಥಿಯು ನಿಗದಿತ 15 ದಿನಗಳ ಒಳಗೆ ಕೆಲಸಕ್ಕೆ ಹಾಜರಾಗಿರುವುದಿಲ್ಲವಾದ್ದರಿಂದ ಉಲ್ಲೇಖ (4)ರಲ್ಲಿ ಮತ್ತೊಮ್ಮೆ ಅವಕಾಶ ನೀಡಿ ನೇಮಕಾತಿ ಆದೇಶ ಹೊರಡಿಸಲಾಗಿತ್ತು. ಆದರೆ ಸದರಿ ಅಭ್ಯರ್ಥಿಯು ನೇಮಕಾತಿ ಆದೇಶದಲ್ಲಿನ ಷರತ್ತಿನಂತೆ ಹಾಗೂ ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ ಸಂಖ್ಯೆ 18(1)ರ ಪ್ರಕಾರ ಅಭ್ಯರ್ಥಿಗೆ ನೇಮಕಾತಿ ಆದೇಶವು ತಲುಪಿದ್ದರೂ ಸಹ ಈವರೆವಿಗೆ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಹಾಗೂ ಹಾಜರಾತಿಗಾಗಿ ಕಾಲಾವಕಾಶವನ್ನು ಸಹ ಕೋರಿರುವುದಿಲ್ಲ. ಕಾರಣ ಶ್ರೀ ಪ್ರವೀಣ್ ಕುಮಾರ್ ಹನ್ನಿ, ತಂದೆ: ವೀರಪ್ಪ ಹನ್ನಿ, ಹೂವಿನಹಡಗಲಿರವರ ಉಲ್ಲೇಖ (3) ಹಾಗೂ (4) ರ ನೇಮಕಾತಿ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿದೆ.

**ಜಿ. ಗೋವಿಂದಾಚಾರ್**

ಪಿ.ಆರ್.203

ಜಿಲ್ಲಾ ನೋಂದಣಾಧಿಕಾರಿ, ಬಳ್ಳಾರಿ ಜಿಲ್ಲೆ, ಬಳ್ಳಾರಿ.

## ಅಧ್ಯಕ್ಷರು, ಆಯ್ಕೆ ಮತ್ತು ನೇರ ನೇಮಕಾತಿ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ
## ಅಧಿಸೂಚನೆ
### ಸಂಖ್ಯೆ: ಇಎಸ್‌ಟಿ (1)ಇಎಸ್‌ಟಿ (1)205/2010-11, ದಿನಾಂಕ 20-04-2011

**ಉಲ್ಲೇಖ:**-(1) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 299 ಬಿಎಸ್‌ಸಿ 2006 ದಿನಾಂಕ: 03-02-2009

(2) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 299 ಬಿಎಸ್‌ಸಿ 2006 ದಿನಾಂಕ: 24-07-2009

(3) ಸರ್ಕಾರದ ಪತ್ರ ಸಂಖ್ಯೆ:ಕಂಇ 04 ಬಿಎಸ್‌ಸಿ 2011 ದಿನಾಂಕ: 25-02-2011

ಮಂಡ್ಯ ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ On line ಮುಖಾಂತರ ಅರ್ಜಿಯನ್ನು ಅಹ್ವಾನಿಸಲಾಗಿದೆ.

ಅರ್ಜಿ ನಮೂನೆಗಳನ್ನು ಇಲಾಖೆಯ ಅಧಿಕೃತ ವೆಬ್ ಸೈಟ್ ವಿಳಾಸ-http://mandya-va.kar.nic.in ನಲ್ಲಿ ಅಳವಡಿಸಲಾಗಿದೆ. ಅರ್ಜಿಗಳು ದಿನಾಂಕ 25-04-2011ರಿಂದ ಸದರಿ ವೆಬ್ ಸೈಟ್‌ನಲ್ಲಿ ಚಾಲನೆಯಲ್ಲಿರುತ್ತದೆ. ಅರ್ಜಿಗಳನ್ನು ಆನ್-ಲೈನ್ ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಸಲ್ಲಿಸಲು ಅವಕಾಶವಿರುವುದಿಲ್ಲ. ಅರ್ಜಿಗಳನ್ನು ದಿನಾಂಕ 23-05-2011ರೊಳಗೆ ಸಲ್ಲಿಸತಕ್ಕದ್ದು.

| ಕ್ರ. ಸಂ. | ಹುದ್ದೆಯ ಹೆಸರು | ಒಟ್ಟು ಹುದ್ದೆ | ವಿದ್ಯಾರ್ಹತೆ | ವೇತನ ಶ್ರೇಣಿ |
|---|---|---|---|---|
| 01 | ಗ್ರಾಮಲೆಕ್ಕಿಗ | 59 | ದ್ವಿತೀಯ ಪಿ.ಯು.ಸಿ ಅಥವಾ 12 ನೇ ತರಗತಿ (12th Standard Examination conducted by Central Board of Secondary Education or ICSE) ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು | 5800–10500 |

**ವರ್ಗೀಕರಣ**

| ಕ್ರ. ಸಂ. | ಹುದ್ದೆಯ ಹೆಸರು | ಒಟ್ಟು | ವರ್ಗೀಕರಣ | | | | | | | | |
|---|---|---|---|---|---|---|---|---|---|---|---|
| | ಗ್ರಾಮ ಲೆಕ್ಕಿಗ | **59** | | ಇತರೆ | ಮಹಿಳೆ | ಗ್ರಾಮೀಣ | ಅಂ.ವಿ | ಮಾ.ಸೈ | ಕ.ಮಾ.ಅ | ಯೋ.ನಿ.ರಾ | ಒಟ್ಟು |
| **2009–10 ನೇ ಸಾಲಿನ ನೇರ ನೇಮಕಾತಿಯಿಂದ ಭರ್ತಿಯಾಗದೇ ಉಳಿದ ಹುದ್ದೆಗಳು** | | | | | | | | | | | |
| 01 | | | ಪ.ಜಾ | 00 | 00 | 01 | 01 | 00 | 00 | 00 | 02 |
| | | | ಪ.ಪಂ | 01 | 01 | 00 | 00 | 00 | 00 | 00 | 02 |
| | | | ಪ್ರ–2ಎ | 00 | 01 | 00 | 01 | 00 | 00 | 00 | 02 |
| | | | ಪ್ರ–3ಬಿ | 00 | 00 | 01 | 00 | 00 | 00 | 00 | 01 |
| | | | ಸಾಮಾನ್ಯ ಅಭ್ಯರ್ಥಿ | 00 | 00 | 00 | 01 | 00 | 00 | 00 | 01 |
| | | | **ಒಟ್ಟು** | **01** | **02** | **02** | **03** | **0** | **0** | **0** | **08** |
| **2010–11 ನೇ ಸಾಲಿನಲ್ಲಿ ಖಾಲಿ ಇರುವ ಹುದ್ದೆಗಳು** | | | | | | | | | | | |
| 02 | | | ಪ.ಜಾ | 01 | 02 | 02 | 00 | 01 | 01 | 01 | 08 |
| | | | ಪ.ಪಂ | 00 | 00 | 01 | 01 | 00 | 00 | 00 | 02 |
| | | | ಪ್ರ–1 | 00 | 00 | 01 | 01 | 00 | 00 | 00 | 02 |
| | | | ಪ್ರ–2ಎ | 01 | 02 | 02 | 00 | 01 | 01 | 01 | 08 |
| | | | ಪ್ರ–2ಬಿ | 00 | 00 | 01 | 01 | 00 | 00 | 00 | 02 |
| | | | ಪ್ರ–3ಎ | 00 | 00 | 01 | 01 | 00 | 00 | 00 | 02 |
| | | | ಪ್ರ–3ಬಿ | 00 | 00 | 01 | 01 | 00 | 00 | 00 | 02 |
| | | | ಸಾಮಾನ್ಯ ಅಭ್ಯರ್ಥಿ | 05 | 08 | 06 | 01 | 02 | 02 | 01 | 25 |
| | | | **ಒಟ್ಟು** | **07** | **12** | **15** | **06** | **04** | **04** | **03** | **51** |
| | | | **ಜುಮ್ಲಾ** | **08** | **14** | **17** | **09** | **04** | **04** | **03** | **59** |

1) ಮಾ.ಸೈ–ಮಾಜಿ ಸೈನಿಕರು 2) ಕ.ಮಾ.ಅ–ಕನ್ನಡ ಮಾಧ್ಯಮ ಅಭ್ಯರ್ಥಿ

3) ಯೋ.ನಿ.ರಾ–ಯೋಜನಾ ನಿರಾಶ್ರಿತರು 4) ಅಂ.ವಿ–ಅಂಗವಿಕಲರು

**ಅರ್ಜಿ ಶುಲ್ಕ:–** ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ –1 ಹಾಗೂ ಮಹಿಳೆಯರಿಗೆ ರೂ 100–00 ಸಾಮಾನ್ಯ ಅಭ್ಯರ್ಥಿಗಳು ರೂ 200–00 ಶುಲ್ಕವನ್ನು, ವೆಬ್ ಸೈಟ್ ವಿಳಾಸ– http://mandya-va.kar.nic.in ನಲ್ಲಿ ಲಭ್ಯವಾಗುವ ಚಲನ್ನಿನ ಮುದ್ರಿತ ಪ್ರತಿಯನ್ನು ತೆಗೆದುಕೊಂಡು ಜಿಲ್ಲೆಯ ಯಾವುದಾದರೂ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಬ್ಯಾಂಕಿನಲ್ಲಿ ಪಾವತಿಸಿ, ಸ್ವೀಕೃತಿಯನ್ನು ಪಡೆಯಬೇಕು.

**ಅಭ್ಯರ್ಥಿಗಳಿಗೆ ಸೂಚನೆ ಮತ್ತು ಷರತ್ತುಗಳು:**

1. ಅರ್ಜಿಗಳನ್ನು ಆನ್‌ಲೈನ್ ಮೂಲಕ ಮಾತ್ರ ಹಾಕತಕ್ಕದ್ದು. ಅಂಚೆ ಅಥವಾ ಕೊರಿಯರ್ ಅಥವಾ ಖುದ್ದಾಗಿ ಸ್ವೀಕರಿಸಲಾಗುವುದಿಲ್ಲ.
2. ವಯೋಮಿತಿ: ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು ಕೆಳಕಂಡ ವಯೋಮಿತಿ ಹೊಂದಿರತಕ್ಕದ್ದು.

| | | | |
|---|---|---|---|
| ಪ.ಜಾ / ಪ.ಪಂ., ಪ್ರವರ್ಗ–1 | : | ಕನಿಷ್ಠ–18 | ಗರಿಷ್ಠ – 40 |
| ಹಿಂದುಳಿದ ವರ್ಗ | : | ಕನಿಷ್ಠ–18 | ಗರಿಷ್ಠ – 38 |
| ಸಾಮಾನ್ಯ ವರ್ಗ | : | ಕನಿಷ್ಠ–18 | ಗರಿಷ್ಠ – 35 |

**ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸುವಷ್ಟರ ಮಟ್ಟಿಗೆ ನಿಗದಿಪಡಿಸಿದೆ.**

ಅ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು/ಅವಳು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವರೋ ಅಷ್ಟು ವರ್ಷಗಳಿಗೆ 3 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷ ಗಳಾಗುವುದೋ ಅಷ್ಟು ವರ್ಷಗಳು.

ಆ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು

ಇ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು

3. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿರುತ್ತದೆ.

4. ನಿಗದಿತ ದಿನಾಂಕದ ನಂತರ ಹಾಕಿದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.

5. ಸರ್ಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಆನ್‌ಲೈನ್‌ನಲ್ಲಿ ಭರ್ತಿ ಮಾಡಿದ ಅರ್ಜಿ ಪ್ರತಿಯನ್ನು ನೇಮಕಾತಿ ಪ್ರಾಧಿಕಾರ / ಇಲಾಖಾ ಮುಖ್ಯಸ್ಥರ ಮುಖಾಂತರ ಅರ್ಜಿಯನ್ನು ಸಲ್ಲಿಸುವುದು.

6. ಅಭ್ಯರ್ಥಿಗಳ ಆಯ್ಕೆ ಬಗ್ಗೆ ಪ್ರಚಾರ ಅಥವಾ ಶಿಫಾರಸ್ಸುಗಳನ್ನು ಮಾಡಿದರೆ ಅಂಥವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

7. ಅರ್ಜಿದಾರರೊಡನೆ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

8. ಜಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು ಜಾತಿ ಆದಾಯ ಪರಿಶೀಲನಾ ಸಮಿತಿ) ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.

9. ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರಿಯಾದ ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ರವರು ಕಾಯ್ದಿರಿಸಿಕೊಂಡಿರುತ್ತಾರೆ.

10.ಆಯ್ಕೆಯನ್ನು ಅಭ್ಯರ್ಥಿಯ ಮೆರಿಟ್ ಆಧಾರದ ಮೇಲೆ ಮಾತ್ರ ಪರಿಗಣಿಸಲಾಗುವುದು.

11. **ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು:** – ಮೀಸಲಾತಿ ಸೌಲಭ್ಯ ಅಪೇಕ್ಷಿಸುವ ಅಭ್ಯರ್ಥಿಗಳು ಈ ಕೆಳಕಂಡ ಮೂಲ ದಾಖಲೆಗಳನ್ನು ನಿಗಧಿತ ನಮೂನೆಯಲ್ಲಿ ಸಂಬಂಧಪಟ್ಟ ರೆವಿನ್ಯೂ ಪ್ರಾಧಿಕಾರದಿಂದ (ಸಂಬಂಧಪಟ್ಟ ತಹಸೀಲ್ದಾರ್ ರಿಂದ)ಪಡೆದು ಪರಿಶೀಲಿಸುವ ದಿನಾಂಕದಂದು ಹಾಜರುಪಡಿಸಬೇಕು ತಪ್ಪಿದ್ದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು.

ಪ.ಜಾ / ಪ.ಪಂ. * ನಮೂನೆ– ಡಿ ಯಲ್ಲಿ, ಪ್ರವರ್ಗ –1 : * ನಮೂನೆ– ಇ ಯಲ್ಲಿ

ಪ್ರವರ್ಗ 2ಎ, 2ಬಿ, 3ಎ, 3ಬಿ : * ನಮೂನೆ– ಎಫ್ ನಲ್ಲಿ ಸಂಬಂಧಪಟ್ಟ ತಹೀಲ್ದಾರ್ ರವರಿಂದ ಚಾಲ್ತಿಯಲ್ಲಿರುವ ಪ್ರಮಾಣಪತ್ರ ವನ್ನು ಪಡೆದಿರಬೇಕು

**12. ಯೋಜನೆ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು:**

ಯೋಜನಾ ನಿರಾಶ್ರಿತರ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿಡಲಾದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು ಸಂಬಂಧಿಸಿದ ತಹಸೀಲ್ದಾರ್ ರವರು ನೀಡಿದ ಪ್ರಮಾಣ ಪತ್ರಗಳನ್ನು ಪಡೆದಿರಬೇಕು.

**13. ಮಾಜಿ ಸೈನಿಕರ ಕುಟುಂಬದ ಅಭ್ಯರ್ಥಿಗಳು :**

ಮಾಜಿ ಸೈನಿಕರು ಎನ್ನುವ ಬಗ್ಗೆ ಅಥವಾ ಭಾರತ ದೇಶದ ಒಕ್ಕೂಟ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುತ್ತಿರುವಾಗ ಮರಣ ಹೊಂದಿದ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರು ಎಂಬ ಬಗ್ಗೆ ಸಕ್ಷಮ ಮಿಲಿಟರಿ ಅಧಿಕಾರಿ ಗಳಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

**14. ಅಂಗವಿಕಲ ಅಭ್ಯರ್ಥಿಗಳು** :ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 9(1–ಎ) ಅನ್ವಯ ರಾಜ್ಯ ಸಿವಿಲ್ ಸೇವೆಯಲ್ಲಿನ ಗ್ರೂಪ್ ಸಿ ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರ ಶೇಕಡಾ 5ರಷ್ಟು ಸಮತಳ ಮೀಸಲಾತಿ ಕಲ್ಪಿಸಲಾಗಿದೆ. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 128 ಸೆನೆನಿ 2006 ದಿನಾಂಕ 1–8–2009ರಂತೆ ಮೀಸಲಾತಿ ನೀಡಲಾಗುವುದು. ಸರ್ಕಾರದ ಅಧಿಸೂಚನೆ ಸಂ:ಡಿಪಿಎಆರ್ 52 ಎಸ್‌ಎಸ್‌ಆರ್ 99 ದಿನಾಂಕ 29–11–2002 ರೀತ್ಯಾ, ಗ್ರಾಮ ಲೆಕ್ಕಿಗರ ಹುದ್ದೆಗಳಲ್ಲಿ ಅಂಗವಿಕಲರ ಮೀಸಲಾತಿಯನ್ನು ಈ ಕೆಳಕಂಡ ವರ್ಗಗಳಿಗೆ ಮಾತ್ರ ಕಲ್ಪಿಸಲಾಗಿದೆ. 1.ಕುಷ್ಠರೋಗದಿಂದ ಗುಣಮುಖರಾದವರು (Leprosy cured) 2.ಶ್ರವಣ ದೋಷವುಳ್ಳವರು (Hearing impaired) 3.ಮಾನಸಿಕ ಅಸ್ವಸ್ಥತೆ (Mentally ill) **ಈ ಮೇಲಿನ ಅಂಗವಿಕಲರು ಹೊರತುಪಡಿಸಿ ಇತರ ದೈಹಿಕ ಅಂಗವಿಕಲತೆವುಳ್ಳ ಅಭ್ಯರ್ಥಿಗಳು ಗ್ರಾಮ ಲೆಕ್ಕಿಗರ ಹುದ್ದೆಗಳಲ್ಲಿ ಅಂಗವಿಕಲರ ಮೀಸಲಾತಿಯಡಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ**. ಸರ್ಕಾರದ ಅಧಿಕೃತ ಜ್ಞಾಪನ ಸಂ:ಸಿಆಸುಇ 128 ಸೆನೆನಿ 2005 ದಿನಾಂಕ19–11–2005 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯು ನೀಡುವ ಪ್ರಮಾಣ ಪತ್ರವನ್ನು ಪಡೆದು ಕೊಂಡಿರತಕ್ಕದ್ದು. ಬೇರೆ ಯಾವುದೇ ನಮೂನೆಗಳಲ್ಲಿ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ. ಈ ಪ್ರಮಾಣ ಪತ್ರದ ನಮೂನೆಯನ್ನು ಲಗತ್ತಿಸಿದೆ.

**15. ಗ್ರಾಮೀಣ ಅಭ್ಯರ್ಥಿಗಳು :**

ಗ್ರಾಮೀಣ ಅಭ್ಯರ್ಥಿ ಎಂದರೆ, ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯು ಎಸ್. ಎಸ್.ಎಲ್.ಸಿ ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಿಯಿಂದ ದೃಢೀಕೃತ ಗ್ರಾಮೀಣ ಧೃಡೀಕರಣ ಪತ್ರವನ್ನು ಪಡೆದಿರಬೇಕು ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು ಗ್ರಾಮೀಣ ಅಭ್ಯರ್ಥಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2ರ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ

ಸಂಬಂದಪಟ್ಟ ತಹಸೀಲ್ದಾರ್ ರವರಿಂದ ಪಡೆದು,. ಅಂತೆಯೆ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ–1, ಪ್ರವರ್ಗ –2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2ರಲ್ಲಿ ನಿಗಧಿತ ಪ್ರಾಧಿಕಾರಿಗಳಿಂದ ಪಡೆದು ಸಂಬಂದಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲು ರುಜು ಮತ್ತು ಮೊಹರು ಮಾಡಿಸಿರಬೇಕು.

**16. ಕನ್ನಡ ಮಾಧ್ಯಮ ಅಭ್ಯರ್ಥಿಗಳು.**

ಸರ್ಕಾರದ ಅಧಿಸೂಚನೆ ಸಂ: ಡಿಪಿಎಆರ್ 71 ಎಸ್ ಆರ್ ಆರ್ 2001 ದಿ: 24.10.2002 ರಲ್ಲಿ ಹೊರಡಿಸಿರುವ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ (9) (1) (ಸಿ) ರನ್ವಯ ಅಭ್ಯರ್ಥಿಯು 1ರಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಮಾಡಿದ ಪ್ರಮಾಣ ಪತ್ರವನ್ನು ಪಡೆದಿರಬೇಕು

**17. ಅರ್ಹತಾ ಷರತ್ತುಗಳು :**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು. ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟುಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನ್ಯತೆಯಿಂದ ಮುಕ್ತರಾಗಿರಬೇಕು.

ಇ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈಧ್ಯಕೀಯ ಮಂಡಳಿ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ಆಯ್ಕೆ ಪ್ರಾಧಿಕಾರ/ರಾಜ್ಯ ಸರ್ಕಾರ ಕಾಯ್ದಿರಿಸಿಕೊಂಡಿದೆ ಮತ್ತು ಆಯ್ಕೆ ಪ್ರಾಧಿಕಾರದ ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ. ನಿಗಧಿತ ಶೈಕ್ಷಣಿಕ ಅರ್ಹತೆ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರಬೇಕು.

**18. ಕೆಳಕಂಡ ಮೂಲ ದಾಖಲೆಗಳನ್ನು ದಾಖಲಾತಿಗಳ ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸಬೇಕು.**

*. ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿ / ಪ್ರಮಾಣ ಪತ್ರ ಮತ್ತು ಕಂಪ್ಯೂಟರ್ ಜ್ಞಾನದ ಬಗ್ಗೆ ದಾಖಲೆ

* ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಜನ್ಮ ದಿನಾಂಕವನ್ನು ತೋರಿಸುವ ಶೈಕ್ಷಣಿಕ ಸಂಚಿತ ದಾಖಲೆಯ ಉಧೃತ ಭಾಗ.

* ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)

* ಪರಿಶಿಷ್ಠ ಜಾತಿ / ಪರಿಶಿಷ್ಠ ಪಂಗಡ, ಪ್ರವರ್ಗ–1, ಪ್ರವರ್ಗ –2ಎ, ಪ್ರವರ್ಗ –2ಬಿ, ಪ್ರವರ್ಗ– 3ಎ, 3ಬಿ, ಗಳ ಪ್ರಮಾಣ ಪತ್ರಗಳು (ಮೀಸಲಾತಿ ಕೋರಿದ್ದಲ್ಲಿ ).

* ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ (ಮೀಸಲಾತಿ ಕೋರಿದ್ದಲ್ಲಿ ).

* ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ).

* ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ ).

* ಯೋಜನೆಗಳಿಂದ ನಿರಾಶ್ರಿತರಾದ ಬಗ್ಗೆ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ).

* ವಿಧವೆಯಾದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.

ಮೇಲ್ಕಂಡಂತೆ ನಿಗದಿಪಡಿಸಿದ ಎಲ್ಲಾ ದಾಖಲೆಗಳನ್ನು ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ ದಾಖಲಾತಿಗಳ ಪರಿಶೀಲನೆಯ ಸಮಯದಲ್ಲಿ ಹಾಜರ್‌ಪಡಿಸತಕ್ಕದ್ದು.

**19. ಇತರೆ ಸೂಚನೆಗಳು :**

1) ಅರ್ಜಿಯಲ್ಲಿ ತಪ್ಪು/ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆಯುವ ಅಭ್ಯರ್ಥಿಗಳ ನೇಮಕಾತಿಯನ್ನು ವಜಾಗೊಳಿಸುವುದಲ್ಲದೆ ಕ್ರಿಮಿನಲ್ ಮೊಕದ್ದಮೆ ದಾಖಲಿಸಲಾಗುವುದು.

2) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

3) ಅರ್ಜಿಯಲ್ಲಿ ನೀಡುವ ವಿಳಾಸವೇ ಅಂತಿಮವಾಗಿದ್ದು ಎಲ್ಲಾ ಪತ್ರ ವ್ಯವಹಾರಗಳನ್ನು ಅದೇ ವಿಳಾಸಕ್ಕೆ ಕಳುಹಿಸಿ ಕೊಡಲಾಗುವುದು. ನಂತರದಲ್ಲಿ ವಿಳಾಸ ಬದಲಾವಣೆ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಪರಿಗಣಿಸಲಾಗುವುದಿಲ್ಲ.

4) ಅರ್ಹ ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವ ಮುನ್ನ ವೆಬ್ ಸೈಟ್‌ನಲ್ಲಿ ತಿಳಿಸಿರುವ ಸೂಚನೆಗಳನ್ನು ಪಾಲಿಸುವುದು.

5) ಅಭ್ಯರ್ಥಿಯ ಹೆಸರು ಅಂತಿಮ ಆಯ್ಕೆಪಟ್ಟಿಯಲ್ಲಿ ಸೇರ್ಪಡೆಯಾಗಿದೆ ಎಂಬುದರ ಆಧಾರದ ಮೇಲೆ ಅಭ್ಯರ್ಥಿಗೆ ನೇಮಕಾತಿಯ ಹಕ್ಕು ದೊರೆಯುವುದಿಲ್ಲ.

6) ಹೆಚ್ಚಿನ ಮಾಹಿತಿಗಾಗಿ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಈ ಕೆಳಕಂಡಂತೆ ಸಂಪರ್ಕಿಸತಕ್ಕದ್ದು.

1) ಇ–ಮೇಲ್ :vamandya!@gmail.com

2) ದೂರವಾಣಿ :08232–231215

3) ಫಾಕ್ಸ್ ನಂ : 08232–225596

ಅಧ್ಯಕ್ಷರು,

ಆಯ್ಕೆ ಮತ್ತು ನೇರ ನೇಮಕಾತಿ ಪ್ರಾಧಿಕಾರ ಹಾಗೂ

ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.192

**ಕರ್ನಾಟಕ ಲೋಕ ಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560 001.**

**ಅಧಿಸೂಚನೆ**

**ಸಂಖ್ಯೆ: ಪಿಎಸ್‌ಸಿ 1 ಆರ್‌ಟಿಬಿ–1/2011, ದಿನಾಂಕ: 17–05–2011**

**1.** ಆಯೋಗವು ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ರಡಿಯಲ್ಲಿ ಕೆಳಕಂಡ ತಾಂತ್ರಿಕ ಹುದ್ದೆಗಳನ್ನು ಭರ್ತಿ ಮಾಡಲು **ON-LINE ಮೂಲಕ** ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ:–

| ಕ್ರಮ ಸಂಖ್ಯೆ | ಇಲಾಖೆಯ ಹೆಸರು ಮತ್ತು ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| | **ಗ್ರೂಪ್ – ' ಬಿ ' ಹುದ್ದೆಗಳು** | |
| 1 | ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಉಪ ಅಭಿವೃದ್ಧಿ ಅಧಿಕಾರಿ | 02 |
| 2 | ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಸಹಾಯಕ ಅಭಿಯಂತರರು (ಸಿವಿಲ್) | 14 |
| 3 | ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಸಹಾಯಕ ಅಭಿಯಂತರರು(ವಿದ್ಯುತ್) | 04 |
| 4 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಲ್ಲಿ ಸಹಾಯಕ ನಿರ್ದೇಶಕರು | 20 |
| 5 | ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ರಸಾಯನ ಶಾಸ್ತ್ರಜ್ಞ | 02 |
| 6 | ಲೋಕೋಪಯೋಗಿ ಇಲಾಖೆಯಲ್ಲಿ ಸಹಾಯಕ ಇಂಜಿನಿಯರ್(ವಿಭಾಗ–1)(ಸಿವಿಲ್) | 100 |
| 7 | ಔಷಧ ನಿಯಂತ್ರಣ ಇಲಾಖೆಯಲ್ಲಿ ಔಷಧ ಪರಿವೀಕ್ಷಕರು | 11 |
| 8 | ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿ ಭೂದಾಖಲೆಗಳ ಸಹಾಯಕ ನಿರ್ದೇಶಕರು (ಕಾರ್ಯ ನಿರ್ವಾಹಕ) | 51 |
| 9 | ತಾಂತ್ರಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪಾಲಿಟೆಕ್ನಿಕ್‌ಗಳಲ್ಲಿ ಸಿವಿಲ್/ಟೆಲಿಕಮ್ಯೂನಿಕೇಷನ್(ಎಲೆಕ್ಟ್ರಾನಿಕ್ಸ್) /ಕಂಪ್ಯೂಟರ್ ಸೈನ್ಸ್/ಎಲೆಕ್ಟ್ರಿಕಲ್/ಮೆಕ್ಯಾನಿಕಲ್/ವಿಜ್ಞಾನ ಉಪನ್ಯಾಸಕರು | 675 |
| | **ಗ್ರೂಪ್ – ' ಸಿ ' ಹುದ್ದೆಗಳು** | |
| 10 | ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಇಲ್ಲಿ ಪುರಾತತ್ವ ಸಹಾಯಕರು | 03 |
| 11 | ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಇಲ್ಲಿ ಶಾಸನ ತಜ್ಞರು | 01 |
| 12 | ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಇಲ್ಲಿ ಸಹಾಯಕ ಕ್ಯುರೇಟರ್ | 02 |
| 13 | ಸಾರಿಗೆ ಇಲಾಖೆಯಲ್ಲಿ ಮೋಟಾರು ವಾಹನ ನಿರೀಕ್ಷಕರು | 100 |
| 14 | ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ಜೂನಿಯರ್ ಇಂಜಿನಿಯರ್ (ಸಿವಿಲ್) | 09 |
| 15 | ಲೋಕೋಪಯೋಗಿ ಇಲಾಖೆಯಲ್ಲಿ ಕಿರಿಯ ಇಂಜಿನಿಯರ್(ಸಿವಿಲ್) | 100 |
| 16 | ಕರ್ನಾಟಕ ಗೃಹ ಮಂಡಳಿಯಲ್ಲಿ ಕಿರಿಯ ಅಭಿಯಂತರರು | 01 |
| 17 | ಔಷಧ ನಿಯಂತ್ರಣ ಇಲಾಖೆಯಲ್ಲಿ ಪ್ರಯೋಗಶಾಲಾ ತಂತ್ರಜ್ಞರು | 08 |

**ಟಿಪ್ಪಣಿ:** ಅನುಸೂಚಿಯಲ್ಲಿ ತಿಳಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

ಅಭ್ಯರ್ಥಿಗಳು ಒಂದು ಹುದ್ದೆಗೆ ಒಂದೇ ಅರ್ಜಿ ಸಲ್ಲಿಸತಕ್ಕದ್ದು, ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ, ಅಂತಹ ಅರ್ಜಿಗಳನ್ನು ಯಾವುದೇ ಮುನ್ಸೂಚನೆಯಿಲ್ಲದೇ ತಿರಸ್ಕರಿಸಲಾಗುವುದು.

ಅರ್ಜಿಗಳನ್ನು ಆನ್–ಲೈನ್ (ON-LINE) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು, ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.

1) ಅಭ್ಯರ್ಥಿಗಳು ಯಾವುದೇ ತಪ್ಪು ಮಾಹಿತಿಯನ್ನು ನೀಡದೇ ಅರ್ಜಿ ಭರ್ತಿ ಮಾಡಲು On-Line ನಲ್ಲಿ ನೀಡಿರುವ ಸೂಚನೆಗಳನ್ವಯ ಭರ್ತಿ ಮಾಡತಕ್ಕದ್ದು.

2) ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದಲ್ಲಿ ಅಂತಹವರ ವಿರುದ್ಧ ಆಯೋಗವು ಕಾನೂನಿನನ್ವಯ ಸೂಕ್ತ ಕ್ರಮ ಕೈಗೊಳ್ಳುವುದು.

**ವಿಶೇಷ ಸೂಚನೆ:–** ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಇಚ್ಛಿಸಿದ್ದಲ್ಲಿ, ಅಂತಹ ಅಭ್ಯರ್ಥಿಗಳು ಪ್ರತಿ ಹುದ್ದೆಗೆ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಿ ಶುಲ್ಕವನ್ನು ಪಾವತಿಸತಕ್ಕದ್ದು.

**2. ಶುಲ್ಕ:–**

| | |
|---|---|
| ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | ₹ 300/– |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1 ಮತ್ತು ಅಂಗವಿಕಲ ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳಿಗೆ | ₹ 25/– |

**2.1 ನಿಗದಿತ ಶುಲ್ಕವನ್ನು ಸಿಂಡಿಕೇಟ್ ಬ್ಯಾಂಕಿನ ಯಾವುದೇ ಶಾಖೆಗಳಲ್ಲಿ ಚಲನ್ ನೀಡಿ ಹಣ ಪಾವತಿಸತಕ್ಕದ್ದು.** ಈ ಸಂಬಂಧ **ON-LINE** ನಲ್ಲಿ ಅರ್ಜಿ ಸಲ್ಲಿಸಿ ಬ್ಯಾಂಕಿನ ಚಲನ್‌ಗಳನ್ನು ಡೌನ್‌ಲೋಡ್ ಮಾಡಿಕೊಂಡು ನಿಗದಿಪಡಿಸಿದ ಮೊಬಲಗನ್ನು ಸಂಬಂಧಿಸಿದ ಬ್ಯಾಂಕ್‌ಗೆ ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಪಾವತಿಸತಕ್ಕದ್ದು. ಇದನ್ನು ಹೊರತುಪಡಿಸಿ ಡಿ.ಡಿ., ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ.

3. ಅಭ್ಯರ್ಥಿಗಳು ONLINE ಮೂಲಕ ಅರ್ಜಿ ಭರ್ತಿ ಮಾಡುವ ಮೊದಲು ಸೂಚನೆಗಳನ್ನು ಕಡ್ಡಾಯವಾಗಿ ತಿಳಿದುಕೊಳ್ಳತಕ್ಕದ್ದು

**ಹಂತ–1**

(1) ಅಭ್ಯರ್ಥಿಗಳು ಅಧಿಸೂಚನೆ ಹಾಗೂ ಸೂಚನೆಗಳನ್ನು ತಪ್ಪದೇ ಓದಿಕೊಂಡ ನಂತರ ಅರ್ಜಿಯನ್ನು ಭರ್ತಿ ಮಾಡತಕ್ಕದ್ದು.

(2) ಆಯೋಗದ ವೆಬ್ ಸೈಟ್ "http://kpsc.kar.nic.in" ನ Home page ನಲ್ಲಿ On-line Application for Technical Posts (ತಾಂತ್ರಿಕ ಹುದ್ದೆಗಳು) ಮೇಲೆ ಕ್ಲಿಕ್ ಮಾಡಿದ ನಂತರ Fresh Application ಮೇಲೆ ಕ್ಲಿಕ್ ಮಾಡುವುದು.

(3) ಅರ್ಜಿ ಸಲ್ಲಿಸಬೇಕಿರುವ ಹುದ್ದೆಗಳ ಗುಂಪನ್ನು ಆರಿಸಿಕೊಂಡ ನಂತರ Apply button ಅನ್ನು ಕ್ಲಿಕ್ ಮಾಡಿ,ಯಾವ ಹುದ್ದೆಗಾಗಿ ಅರ್ಜಿ ಸಲ್ಲಿಸುತ್ತಿರುವುದಾಗಿ ಆರಿಸಿಕೊಂಡ ನಂತರ Apply button ಮೇಲೆ ಕ್ಲಿಕ್ ಮಾಡುವುದು.

(4) ಈಗ ಪರದೆಯ ಮೇಲೆ ಅರ್ಜಿಯ ನಮೂನೆಯು ಮೂಡುತ್ತದೆ. ಆಗ ಅಭ್ಯರ್ಥಿಯು ಎಲ್ಲಾ ವಿವರಗಳನ್ನು ಭರ್ತಿ ಮಾಡುವುದು. ಅರ್ಜಿಯಲ್ಲಿ ಭರ್ತಿ ಮಾಡಿದ ಎಲ್ಲಾ ವಿವರಗಳು ಪರದೆಯ ಮೇಲೆ ಮೂಡುತ್ತದೆ.

(5) ಅಭ್ಯರ್ಥಿಗಳು ಎಲ್ಲಾ ವಿವರಗಳನ್ನು ಭರ್ತಿ ಮಾಡಿದ ನಂತರ Preview button ಮೇಲೆ ಕ್ಲಿಕ್ ಮಾಡಿದ ನಂತರ Preview Page ಮೂಡುತ್ತದೆ.

(6) ಅಭ್ಯರ್ಥಿಗೆ Application ID ಮತ್ತು Password ಗಳನ್ನು ನೀಡಲಾಗುತ್ತದೆ. ಇವುಗಳನ್ನು ತಪ್ಪದೇ ಬರೆದಿಟ್ಟುಕೊಂಡಿರ ತಕ್ಕದ್ದು. ಇದರಿಂದ ಮುಂದಿನ ಹಂತದಲ್ಲಿ ID ಸಂಖ್ಯೆಯನ್ನು ನಮೂದಿಸುವುದರ ಮೂಲಕ Photo ಅನ್ನು Upload ಮಾಡತಕ್ಕದ್ದು.

(7) ಅಭ್ಯರ್ಥಿಗಳು ಭರ್ತಿ ಮಾಡಲಾದ ಎಲ್ಲಾ ವಿವರಗಳು ಪರದೆಯ ಮೇಲೆ ಮೂಡಿದ ನಂತರ ಮತ್ತೊಂದು ಸಲ ಕೂಲಂಕಷವಾಗಿ ಪರಿಶೀಲಿಸಿ, ಏನಾದರೂ ತಪ್ಪುಗಳಿದ್ದಲ್ಲಿ Edit button ಮೇಲೆ ಕ್ಲಿಕ್ ಮಾಡಿ ಅಗತ್ಯ ತಿದ್ದುಪಡಿಗಳನ್ನು ಮಾಡುವುದು.

(8) ಈ ಹಂತದಲ್ಲಿ ಶುಲ್ಕವನ್ನು ಪಾವತಿಸಬೇಕಿರುವ ಚಲನ್ ಮೂಡಿದಾಗ ಅಧಿಸೂಚನೆ/ಸೂಚನೆಗಳಲ್ಲಿ ತಿಳಿಸಿದಂತೆ ಸಿಂಡಿಕೇಟ್ ಬ್ಯಾಂಕಿನ ಯಾವುದೇ ಶಾಖೆಗಳಲ್ಲಿ ಶುಲ್ಕವನ್ನು ಪಾವತಿಸಿ, ಶುಲ್ಕದ ವಿವರಗಳನ್ನು ಚಲನ್‌ನಲ್ಲಿ ನಮೂದಿಸುವುದು.

(9) ಅಭ್ಯರ್ಥಿಗಳಿಗೆ ಚಲನ್‌ನ ಮುದ್ರಣವು ಕಾಣದೇ ಇದ್ದಲ್ಲಿ "Enter Journal Number" ಹಾಗೂ Applied Job ನ Upload Photo Button ಮೇಲೆ ಕ್ಲಿಕ್ ಮಾಡುವುದು. ಆಗ Application ID ಮತ್ತು Password ಅನ್ನು enter ಮಾಡಿದಾಗ ಚಲನ್ ಲಿಂಕ್ ಪ್ರಿಂಟ್ ಅನ್ನು ನೋಡಬಹುದಾಗಿದ್ದು, Print Challan Link ಅನ್ನು ಕ್ಲಿಕ್ ಮಾಡಿದಾಗ ಅದರ ಪ್ರಿಂಟ್ ಅನ್ನು ಅಭ್ಯರ್ಥಿಗಳು ತೆಗೆದುಕೊಳ್ಳಬಹುದು.

3.1 ಎರಡನೇ ಹಂತದಲ್ಲಿ ಈ ಕೆಳಕಂಡಂತೆ ಅಭ್ಯರ್ಥಿಗಳು ಸೂಚನೆಗಳನ್ನು ಪಾಲಿಸತಕ್ಕದ್ದು:–

**ಹಂತ–2**

(1) ಈ ಮೊದಲೇ ಆರಿಸಿಕೊಂಡ ಹುದ್ದೆಗಳ ಗುಂಪನ್ನು ಆಯ್ಕೆ ಮಾಡಿಕೊಳ್ಳುವುದು.

(2) ಅಭ್ಯರ್ಥಿಗಳು ಅರ್ಜಿ ಸಲ್ಲಿಸಿರುವ ಹುದ್ದೆಗಳಿಗೆ ಸಂಬಂಧಿಸಿದಂತೆ ಎಠಣಡಿಟಚಿಟ ಇಟಣಡಿಥಿ ಓಣಟಭಜಡಿ ಹಾಗೂ Photo Upload Button ಗಳನ್ನು ಕ್ಲಿಕ್ ಮಾಡತಕ್ಕದ್ದು.

(3) ಈ ಹಂತದಲ್ಲಿ ನಿಮ್ಮ Application ID ಮತ್ತು Password ಅನ್ನು entry ಮಾಡಲು ಅರ್ಜಿಯಲ್ಲಿ ಕೇಳಲಾಗುತ್ತದೆ.

(4) ಈ ಮೇಲಿನ ವಿವರಗಳನ್ನು ನಮೂದಿಸಿದ ನಂತರ, ಬ್ಯಾಂಕಿನ Journal Number ಮತ್ತು ಶುಲ್ಕ ಪಾವತಿಸಿದ ದಿನಾಂಕವನ್ನು ನಮೂದಿಸತಕ್ಕದ್ದು.

(5) ನಂತರ ಫೋಟೋ ಮತ್ತು ಪೂರ್ಣ ಸಹಿಯನ್ನು Upload ಮಾಡುವ ಪುಟವನ್ನು ನೋಡಬೇಕಿರುತ್ತದೆ.

(6) ಅಭ್ಯರ್ಥಿಗಳು ಫೋಟೋವನ್ನು Upload ಮಾಡಿ, ಅಂದರೆ ಅವರ ಇತ್ತೀಚಿನ ಪಾಸ್‌ಪೋರ್ಟ್ ಆಳತೆಯ ಭಾವ ಚಿತ್ರವನ್ನು ಒಂದು ಹಾಳೆಯ ಮೇಲೆ ಅಂಟಿಸಿ, ಅದರ ಕೆಳಗೆ ಕಪ್ಪು ಶಾಹಿಯ ಸ್ಕೆಚ್ ಪೆನ್ನಲ್ಲಿ ಪೂರ್ಣವಾಗಿ ಸಹಿ ಮಾಡಿ ಅದನ್ನು Scan ಮಾಡಿ ಅರ್ಜಿಗೆ Upload ಮಾಡತಕ್ಕದ್ದು. ನಂತರ ಭರ್ತಿ ಮಾಡಿರುವ ಪೂರ್ತಿ ಅರ್ಜಿಯನ್ನು ಪಡೆಯಲು Reprint Application Button ಅನ್ನು ಒತ್ತಿ ಅರ್ಜಿಯ ಪ್ರತಿ ಪಡೆಯಬಹುದು.

3.2 ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

* ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ: 18–05–2011.
* ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 16–06–2011.
* ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ: 17–06–2011.
* ಶುಲ್ಕ ಪಾವತಿಸಲಾದ Journal Number ನಮೂದಿಸಲು ಕೊನೆಯ ದಿನಾಂಕ: 18–06–2011.

ವಿಶೇಷ ಸೂಚನೆ: On-line ಮೂಲಕ ಅರ್ಜಿಯನ್ನು ಭರ್ತಿ ಮಾಡುವ ಸಂದರ್ಭದಲ್ಲಿ ತಾಂತ್ರಿಕ ತೊಂದರೆ ಅಥವಾ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ (Help line) 8453242869, 8453247103, 8453248059 ಮತ್ತು 8453479899 ಅನ್ನು ಬೆಳಿಗ್ಗೆ 8:00 ಗಂಟೆಯಿಂದ ರಾತ್ರಿ 8.00 ಗಂಟೆಯವರೆಗೆ ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.

**4. ಅರ್ಹತಾ ಷರತ್ತುಗಳು:–**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಈ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**5 (1) ನೇಮಕಾತಿ ವಿಧಾನ:– ಸಂದರ್ಶನ ಮೂಲಕ ಆಯ್ಕೆ**

ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006 ರಲ್ಲಿ ನಿರ್ದಿಷ್ಟಪಡಿಸಲಾದಂತೆ, ಆಯೋಗದಿಂದ ಅಧಿಸೂಚಿಸಲಾಗಿರುವ ಯಾವುದೇ ತಾಂತ್ರಿಕ ಹುದ್ದೆಗಳ ಸಂದರ್ಶನಕ್ಕೆ ಅರ್ಹರಾಗಲು ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ.ಯ ಕನ್ನಡ ಪ್ರಥಮ ಭಾಷೆಯ ಮಟ್ಟದ 150 ಅಂಕಗಳಿಗೆ ಪರೀಕ್ಷೆ ನಡೆಸಲಿದ್ದು, ಅದರಲ್ಲಿ ಕನಿಷ್ಠ 50 ಅಂಕಗಳೊಂದಿಗೆ ಕಡ್ಡಾಯವಾಗಿ ತೇರ್ಗಡೆ ಹೊಂದಲೇಬೇಕು. ನಿಗದಿಪಡಿಸಿದ ಕನಿಷ್ಠ 50 ಅಂಕಗಳನ್ನು ಪಡೆಯದ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಾಗುವುದಿಲ್ಲ ಹಾಗೂ ಈ ಕನ್ನಡ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ.

ಆದರೆ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯ ವಿನಾಯಿತಿ ಬಗ್ಗೆ ಕೆಳಕಂಡ ಷರತ್ತುಗಳನ್ನು ಸೇರ್ಪಡಿಸಲಾಗಿರುತ್ತದೆ.

"ಎಸ್.ಎಸ್.ಎಲ್.ಸಿ. ಅಥವಾ ಇದಕ್ಕೆ ತತ್ಸಮಾನವೆಂದು ರಾಜ್ಯ ಸರ್ಕಾರದಿಂದ ಘೋಷಿಸಲ್ಪಟ್ಟ ಇತರೆ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್.ಎಲ್.ಸಿ.ಪರೀಕ್ಷೆಗಿಂತ ಮೇಲ್ಮಟ್ಟದ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಮುಖ್ಯ ಭಾಷೆಯಾಗಿ, ಅಥವಾ ದ್ವಿತೀಯ ಭಾಷೆಯಾಗಿ ಅಥವಾ ಐಚ್ಛಿಕ ವಿಷಯವಾಗಿ (ಆದರೆ ಸಂಯುಕ್ತ ಪತ್ರಿಕೆಯ ವಿಷಯಗಳಲ್ಲೊಂದಾಗಿರಬಾರದು) ಅಥವಾ ಮೇಲಿನ ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿ ತೇರ್ಗಡೆಯಾಗಿರುವ ಅಥವಾ ಕರ್ನಾಟಕ ಲೋಕ ಸೇವಾ ಆಯೋಗದಿಂದ ಇದೇ ನಿಯಮಗಳಡಿಯಲ್ಲಿ ಈ ಹಿಂದೆ ನಡೆಸಲ್ಪಟ್ಟ ಕಡ್ಡಾಯ ಕನ್ನಡ ಭಾಷೆ ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವ ಅಭ್ಯರ್ಥಿಗಳು, ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದರಿಂದ ವಿನಾಯಿತಿ ಹೊಂದಿರುತ್ತಾರೆ ".

ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಿಂದ ವಿನಾಯಿತಿ ಪಡೆಯಲು ಅರ್ಜಿಯ ನಿಗದಿತ ಸ್ಥಳದಲ್ಲಿ ವಿವರಗಳನ್ನು ನೀಡತಕ್ಕದ್ದು. ಸರಿಯಾದ ಮಾಹಿತಿ ಒದಗಿಸದಿದ್ದಲ್ಲಿ ಮೇಲಿನ ವಿನಾಯಿತಿಗಳನ್ನು ಪಡೆಯಲು ಅರ್ಹತೆ ನೀಡುವುದಿಲ್ಲ.

**ಸೂಚನೆ:–** ಕನ್ನಡ ಕಡ್ಡಾಯ ಭಾಷಾ ಪರೀಕ್ಷೆ ಬಗ್ಗೆ ಪಠ್ಯಕ್ರಮವನ್ನು ಆಯೋಗದ ವೆಬ್ ಸೈಟ್ " http://kpsc. kar.nic.in/SYLLABUS" ನಲ್ಲಿ ಬಿತ್ತರಿಸಲಾಗಿದೆ.

ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಅರ್ಹರಾದ ನಂತರ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006ರ ಉಪನಿಯಮ 6ರನ್ವಯ ಅಭ್ಯರ್ಥಿಗಳನ್ನು ಅವರು ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡವಾರು ಮತ್ತು ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಆಧಾರದ ಮೇಲೆ 1:3 ಅನುಪಾತದಲ್ಲಿ ಸಂದರ್ಶನಕ್ಕೆ ಆಹ್ವಾನಿಸಲಾಗುವುದು. ಅಭ್ಯರ್ಥಿಗಳು ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

ಸಂದರ್ಶನ ನಡೆಸುವ ಉದ್ದೇಶ ಎಂದರೆ ಅಭ್ಯರ್ಥಿಗಳು ಆಯ್ಕೆ ಬಯಸಿದ ಹುದ್ದೆಗೆ ಅವರ ಅರ್ಹತೆ, ವ್ಯಕ್ತಿತ್ವ, ಸಂಬಂಧಿತ ವಿಷಯದಲ್ಲಿ ವ್ಯಕ್ತಪಡಿಸುವ ಸಾಮರ್ಥ್ಯತೆ, ಸೂಕ್ಷ್ಮತೆ ಮತ್ತು ಕರ್ತೃತ್ವ ಶಕ್ತಿ, ಸಾಮಾನ್ಯ ಜ್ಞಾನ ಹಾಗೂ ವಿಷಯದಲ್ಲಿನ ಪರಿಜ್ಞಾನ ಹಾಗೂ ಇನ್ನಿತರ ವಿಶೇಷ ಗುಣಗಳನ್ನು ನಿರ್ಧರಿಸುವುದಾಗಿದ್ದು, ಅಭ್ಯರ್ಥಿಗಳು ಆಯಾ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಗಳಿಸಿದ ಶೇಕಡವಾರು ಅಂಕಗಳ ಮತ್ತು ಆಯೋಗವು ನಡೆಸುವ ಸಂದರ್ಶನದಲ್ಲಿ ಗಳಿಸಿದ ಅಂಕಗಳ ಜೇಷ್ಠತೆಯ ಆಧಾರದ ಮೇಲೆ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳನ್ವಯ ಆಯ್ಕೆ ಮಾಡಲಾಗುವುದು.

ಸಂದರ್ಶನಕ್ಕೆ ನಿಗದಿಪಡಿಸಲಾದ ಗರಿಷ್ಠ ಅಂಕಗಳು 15 (ಹದಿನೈದು)

**6. ಶೈಕ್ಷಣಿಕ ವಿದ್ಯಾರ್ಹತೆ, ವೇತನ ಶ್ರೇಣಿ, ವಯೋಮಿತಿ ಮತ್ತು ಹುದ್ದೆಗಳ ವರ್ಗೀಕರಣ:–**

**6(ಎ) ಶೈಕ್ಷಣಿಕ ವಿದ್ಯಾರ್ಹತೆ:–** ಅರ್ಜಿಗಳನ್ನು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅನುಸೂಚಿಯಲ್ಲಿ ಆಯಾ ಹುದ್ದೆಗಳ ಮುಂದೆ ಸೂಚಿಸಿರುವ ಕನಿಷ್ಠ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಹೊಂದಿರಲೇಬೇಕು. ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದದೆ ಹೆಚ್ಚಿನ ವಿದ್ಯಾರ್ಹತೆಯನ್ನು ಹೊಂದಿದ್ದರೂ ಸಹ ಪರಿಗಣಿಸಲಾಗುವುದಿಲ್ಲ.

ಈ ಹುದ್ದೆಗಳು ತಾಂತ್ರಿಕ ಹುದ್ದೆಗಳಾಗಿದ್ದು ಅಭ್ಯರ್ಥಿಯ ಆಯಾ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯಲ್ಲಿ ಗಳಿಸಿರುವ ಶೇಕಡವಾರು ಅಂಕಗಳ ಆಧಾರದ ಮೇಲೆ ಸಂದರ್ಶನಕ್ಕೆ ಆಹ್ವಾನಿಸುವುದರಿಂದ ಅಭ್ಯರ್ಥಿಗಳು ಅರ್ಜಿಯಲ್ಲಿ ಎಲ್ಲಾ ಸೆಮಿಸ್ಟರ್ / ವರ್ಷಗಳಲ್ಲಿ ಗಳಿಸಿರುವ ಒಟ್ಟಾರು

ಅಂಕಗಳನ್ನು ಕ್ರೋಢೀಕರಿಸಿ ಗರಿಷ್ಠ ಮತ್ತು ಪಡೆದಿರುವ ಅಂಕಗಳನ್ನು ಸ್ಪಷ್ಟವಾಗಿ ನಮೂದಿಸುವುದು. ಕೆಲವು ವಿಶ್ವವಿದ್ಯಾನಿಲಯಗಳು ಮೊದಲನೆ ಬಾರಿ ಗಳಿಸಿರುವ ಅಂಕಗಳನ್ನು ಮಾತ್ರ ನಮೂದಿಸಿದ್ದು, ಒಂದಕ್ಕಿಂತ ಹೆಚ್ಚು ಬಾರಿ ಬರೆದು ಉತ್ತೀರ್ಣರಾಗಿರುವ ಅಂಕಗಳನ್ನು ಗಣನೆಗೆ ತೆಗೆದುಕೊಂಡಿರುವುದಿಲ್ಲ. ಅಭ್ಯರ್ಥಿಗಳು ಆ ಅಂಕಗಳನ್ನು ಸೇರಿಸಿಕೊಂಡು ಜೊತೆಗೆ ಗ್ರೇಸ್ ಮಾರ್ಕ್ಸ್‌ನ್ನು ನೀಡಿದ್ದಲ್ಲಿ ಅದನ್ನು ಒಟ್ಟು ಅಂಕಗಳೊಂದಿಗೆ ಸೇರಿಸಿಕೊಂಡು ಅಂಕಗಳನ್ನು ನಮೂದಿಸುವುದು. ಹಾಗೂ ಗ್ರೇಡ್ ಅಂಕಗಳನ್ನು ಪಡೆದ ಅಭ್ಯರ್ಥಿಗಳು ಅವರ ಗ್ರೇಡ್ ಅಂಕಗಳನ್ನು ಶೇಕಡವಾರು ಅಂಕಗಳಿಗೆ ಪರಿವರ್ತಿಸಿ ವಿಶ್ವವಿದ್ಯಾಲಯ ನೀಡಿರುವ ಪ್ರಮಾಣ ಪತ್ರದಲ್ಲಿ ನಮೂದಿಸಿರುವ ಶೇಕಡವಾರು ಅಂಕಗಳನ್ನು ತಪ್ಪದೇ ನಮೂದಿಸಬೇಕು. ಅಂಕಗಳು ವ್ಯತ್ಯಾಸ ಕಂಡುಬಂದಲ್ಲಿ ಅಭ್ಯರ್ಥಿಯೇ ಜವಾಬ್ದಾರರಾಗಿರುತ್ತಾರೆ. ತಪ್ಪಿದ್ದಲ್ಲಿ ಆಯ್ಕೆಗೆ ಪರಿಗಣಿಸಲಾಗುವುದಿಲ್ಲ.

6(ಬಿ) ಯಾವುದೇ ಹುದ್ದೆಗೆ ಸೇವಾನುಭವವನ್ನು ನಿಗದಿಪಡಿಸಿದಾಗ ಅಭ್ಯರ್ಥಿಗಳು ವಿದ್ಯಾರ್ಹತೆ ಹೊಂದಿದ ನಂತರ ಸೇವಾನುಭವ ಹೊಂದಿರತಕ್ಕದ್ದು.

6(ಸಿ) ಯಾವುದೇ ಹುದ್ದೆಗೆ ಆದ್ಯತಾ ವಿದ್ಯಾರ್ಹತೆಯನ್ನು ನಿಗದಿಪಡಿಸಿದಾಗ ಆದ್ಯತಾ ವಿದ್ಯಾರ್ಹತೆ ಹೊಂದಿರುವ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಪರಿಗಣಿಸಲಾಗುವುದು. ಆದರೆ ಆಯ್ಕೆಪಟ್ಟಿಯನ್ನು ಸಿದ್ಧಪಡಿಸುವಾಗ ಆದ್ಯತಾ ವಿದ್ಯಾರ್ಹತೆ ಹೊಂದಿರುವ ಮತ್ತು ಆದ್ಯತಾ ವಿದ್ಯಾರ್ಹತೆ ಹೊಂದದೇ ಇರುವ ಅಭ್ಯರ್ಥಿಗಳ ಅಂಕಗಳ ಜೇಷ್ಠತೆಯ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಆಧಾರದ ಮೇಲೆ ಮಾಡಲಾಗುವುದು.

**6.2 ವಯೋಮಿತಿ:–** ಅನುಸೂಚಿಯಲ್ಲಿ ಆಯಾ ಹುದ್ದೆಗಳ ಮುಂದೆ ಸೂಚಿಸಿದಂತೆ, ಅರ್ಜಿಗಳನ್ನು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಕನಿಷ್ಠ ವಯೋಮಿತಿಯನ್ನು ಹೊಂದಿರಬೇಕು ಹಾಗೂ ನಿಗದಿತ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

**(ಅ)** ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

**(ಆ)** ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು. (ಈ ಉಪ ಕಂಡಿಕೆಗೆ ಸಂಬಂಧಿಸಿದ ವಿವರಣೆಗಳಿಗೆ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮಗಳು 2 ಮತ್ತು 9 ರನ್ವಯ ಅರ್ಥೈಸಿಕೊಳ್ಳುವುದು)

**(ಇ)** ಅಭ್ಯರ್ಥಿಗಳು ನ್ಯಾಷನಲ್ ಕ್ಯಾಡೆಟ್ ಕೋರ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂಥ ಕ್ಯಾಡೆಟ್ ಪರಿವೀಕ್ಷನಾಗಿ ಅವನು ಸೇವೆ ಸಲ್ಲಿಸಿದಷ್ಟು ವರ್ಷಗಳು.

**(ಈ)** ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡ ಗ್ರಾಮ ಸಮೂಹ ಪರಿಶೀಲಕನಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅವನು / ಅವಳು ಅಂತಹ ಗ್ರಾಮ ಪರಿಶೀಲಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

**(ಉ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು**

**(ಊ)** ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಋ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.

(ೠ) ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದ ಪಕ್ಷದಲ್ಲಿ 10 ವರ್ಷಗಳು.

ಉಪ ಕಂಡಿಕೆ 6.2.(ೠ) ರ ಮೇರೆಗೆ ವಯೋಮಿತಿಯ ಸಡಿಲಿಕೆಯನ್ನು ಕೋರುವ ಅಭ್ಯರ್ಥಿಯು ಜೀತ ಕಾರ್ಮಿಕ ನಾಗಿದ್ದು, ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತ ಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ರಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸಬೇಕು.

**7. ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು :–**

ಮೀಸಲಾತಿ ಕೋರ ಬಯಸುವ ಅಭ್ಯರ್ಥಿಗಳು ಈ ಕೆಳಗೆ ನಮೂದಿಸಿರುವ ನಮೂನೆಗಳಲ್ಲಿಯೇ ಮೀಸಲಾತಿ ಪ್ರಮಾಣ ಪತ್ರಗಳನ್ನು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು:–

ಅ) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು:– ನಮೂನೆ 'ಡಿ'

ಆ) ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು:– ನಮೂನೆ 'ಇ'

ಇ) ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು:– ನಮೂನೆ 'ಎಫ್'

ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಸೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಅಂದರೆ ಹಿಂದುಳಿದ ವರ್ಗಗಳ ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿ ವರ್ಗದ ಮೀಸಲಾತಿ ಪ್ರಮಾಣ ಪತ್ರಗಳನ್ನು ಪಡೆದ ದಿನಾಂಕದಿಂದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೆ ಐದು ವರ್ಷಗಳ ಅವಧಿಯಲ್ಲಿರಬೇಕು. ಅರ್ಜಿಯ ನಿಗದಿತ ಸ್ಥಳದಲ್ಲಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ನಮೂದಿಸತಕ್ಕದ್ದು, ಹಾಗೂ

ಅದೇ ಪ್ರಮಾಣ ಪತ್ರವನ್ನು ಸಂದರ್ಶನ ಸಮಯದಲ್ಲಿ ಹಾಜರುಪಡಿಸತಕ್ಕದ್ದು. ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಈ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ಅರ್ಹರಾದಲ್ಲಿ ಮಾತ್ರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅಭ್ಯರ್ಥಿಗಳ ಸೂಚನೆಗಳಲ್ಲಿ ತೋರಿಸಲಾಗಿದೆ. ಈ ನಮೂನೆಗಳನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಗಳಲ್ಲಿ ಪಡೆಯಲಾದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

**8. ಗ್ರಾಮೀಣ ಅಭ್ಯರ್ಥಿ**

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 08 ಸೇನೆನಿ 2001 ದಿನಾಂಕ 13–02–2001 ರನ್ವಯ ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2ನ್ನು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜುವಿನೊಂದಿಗೆ ಹಾಗೂ ಈ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2ರಲ್ಲಿ ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜು ಪಡೆದಿಟ್ಟುಕೊಂಡಿರತಕ್ಕದ್ದು. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು ಹಾಗೂ ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಇದೇ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಇತರೆ ನಮೂನೆಗಳಲ್ಲಿ ಸಲ್ಲಿಸಲ್ಪಡುವ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು ಹಾಗೂ ಅಂತಹವರು ಗ್ರಾಮೀಣ ಮೀಸಲಾತಿಗೆ ಅನರ್ಹರಾಗುತ್ತಾರೆ. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅಭ್ಯರ್ಥಿಗಳ ಸೂಚನೆಗಳಲ್ಲಿ ತೋರಿಸಲಾಗಿದೆ).

**9. ಕನ್ನಡ ಮಾಧ್ಯಮ ಅಭ್ಯರ್ಥಿ**

ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಆಸುಇ 71 ಸೇನೆನಿ 2001 ದಿನಾಂಕ 24–10–2002 ರನ್ವಯ ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು ಹಾಗೂ ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಇದೇ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಈ ಪ್ರಮಾಣ ಪತ್ರದ ನಮೂನೆಯನ್ನು ಅಭ್ಯರ್ಥಿಗಳ ಸೂಚನೆಗಳಲ್ಲಿ ತೋರಿಸಲಾಗಿದೆ).

**10. ಅಂಗವಿಕಲ ಅಭ್ಯರ್ಥಿ**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ 03–09–2005 ರಲ್ಲಿ ರಾಜ್ಯ ಸಿವಿಲ್ ಸೇವೆಗಳ ಸಮೂಹ –' ಎ ' ಮತ್ತು ' ಬಿ ' ಗುಂಪಿನ ಹುದ್ದೆಗಳಿಗೆ ಶೇಕಡ 3 ರಷ್ಟು (ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 21 ಎಸ್‌ಆರ್‌ಆರ್ 2008 ದಿನಾಂಕ 03–08–2009ರ ಅನುಸೂಚಿಯಡಿ ಸೇರ್ಪಡೆ ಮಾಡಲಾಗಿರುವ ಇಲಾಖೆಗಳು) ಮತ್ತು ಸಮೂಹ 'ಸಿ' ಗುಂಪಿನ ಹುದ್ದೆಗಳಿಗೆ ಶೇಕಡ 5 ರಷ್ಟು (ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 52 ಎಸ್‌ಆರ್‌ಆರ್ 99 ದಿನಾಂಕ:29–11–2002ರ ಅನುಸೂಚಿಯಡಿ ಸೇರ್ಪಡಿಸಲಾಗಿರುವ ಇಲಾಖೆಗಳು) ಹುದ್ದೆಗಳನ್ನು ಅಂಗವಿಕಲರಿಗೆ ಮೀಸಲಾತಿ ಕಲ್ಪಿಸಿದ್ದು, ಇದರನ್ವಯ ಶೇಕಡ 40 ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 115 ಸೇನೆನಿ 2005 ದಿನಾಂಕ 19–11–2005ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು / ಗುರುತಿನ ಚೀಟಿಯ ಪ್ರತಿಗಳನ್ನು ಪರಿಗಣಿಸಲು ಬರುವುದಿಲ್ಲ. ಈ ಪ್ರಮಾಣ ಪತ್ರದ ನಮೂನೆಯನ್ನು ಸೂಚನೆಗಳಲ್ಲಿ ಅನುಬಂಧಿಸಲಾಗಿದೆ. ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು.

**11. ಯೋಜನೆಗಳಿಂದ ನಿರಾಶ್ರಿತ ಅಭ್ಯರ್ಥಿ (PDP)**

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 23 ಸೇನೆನಿ 99 ದಿನಾಂಕ 23–11–2000 ರನ್ವಯ ಯೋಜನೆಗಳಿಂದ ನಿರ್ವಸಿತರಾದ (ಆದರೆ ಈ ನಿಯಮಗಳು ಜಾರಿಯಾಗುವ 20 ವರ್ಷಕ್ಕೆ ಮುನ್ನ ನಿರ್ವಸಿತರಾದ ಕುಟುಂಬ ಅಭ್ಯರ್ಥಿಗಳಿಗೆ ಈ ಮೀಸಲಾತಿ ಅನ್ವಯವಾಗುವುದಿಲ್ಲ) ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು (**ಗ್ರೂಪ್ 'ಸಿ' ಹುದ್ದೆಗಳಿಗೆ ಮಾತ್ರ**) ಕ್ಲೇಮು ಮಾಡುವ ಅಭ್ಯರ್ಥಿಗಳು ಸಂಬಂಧಿತ ತಹಶೀಲ್ದಾರ್‌ರವರಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು ಹಾಗೂ ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಇದೇ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು

ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಈ ಪ್ರಮಾಣ ಪತ್ರದ ನಮೂನೆಯನ್ನು ಅಭ್ಯರ್ಥಿಗಳ ಸೂಚನೆಗಳಲ್ಲಿ ತೋರಿಸಲಾಗಿದೆ).

**12. ದೇಹ ದಾರ್ಢ್ಯತೆ ಪ್ರಮಾಣ ಪತ್ರ:–**

ಅನುಸೂಚಿಯಲ್ಲಿನ ಸಾರಿಗೆ ಇಲಾಖೆಯ ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳಿಗೆ ದೇಹ ದಾರ್ಢ್ಯತೆಯನ್ನು ನಿಗದಿಪಡಿಸಿದ್ದು, ಸದರಿ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ನಿಗದಿಪಡಿಸಿದ ದೇಹ ದಾರ್ಢ್ಯತೆಯನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಹೊಂದಿರಬೇಕು ಮತ್ತು ದೇಹ ದಾರ್ಢ್ಯತೆಯ ಪ್ರಮಾಣ ಪತ್ರವನ್ನು ಸಹಾಯಕ ಶಸ್ತ್ರಚಿಕಿತ್ಸಕ ಹುದ್ದೆಯ ಶ್ರೇಣಿಗಿಂತ ಕಡಿಮೆಯಿಲ್ಲದ ವೈದ್ಯಾಧಿಕಾರಿಯಿಂದ ಪಡೆದಿರತಕ್ಕದ್ದು, ಈ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೆ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು. (ಈ ಪ್ರಮಾಣ ಪತ್ರದ ನಮೂನೆಯನ್ನು ಅಭ್ಯರ್ಥಿಗಳ ಸೂಚನೆಗಳಲ್ಲಿ ತೋರಿಸಲಾಗಿದೆ).

13 (ಎ) ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯನ್ನು ಬೆಂಗಳೂರು / ಮೈಸೂರು / ಧಾರವಾಡ / ಗುಲ್ಬರ್ಗಾ / ಶಿವಮೊಗ್ಗ ಕೇಂದ್ರಗಳಲ್ಲಿ ಹಾಗೂ ಆಯೋಗವು ನಿಗದಿಪಡಿಸಿರುವ ಇತರೆ ಯಾವುದೇ ಕೇಂದ್ರ ಸ್ಥಳದಲ್ಲಿ ನಡೆಸಲಾಗುವುದು.

ಅಭ್ಯರ್ಥಿಗಳು ಅರ್ಜಿ ನಮೂನೆಯಲ್ಲಿ ಅವರು ಕಡ್ಡಾಯ ಕನ್ನಡ ಭಾಷಾ ಪರೀಕ್ಷೆ ತೆಗೆದುಕೊಳ್ಳಲು ಇಚ್ಛಿಸುವ ಕೇಂದ್ರವನ್ನು ನಮೂದಿಸತಕ್ಕದ್ದು. ಪರೀಕ್ಷಾ ಕೇಂದ್ರವನ್ನು ನಿಗದಿಪಡಿಸುವುದು ಆಯೋಗದ ಅಂತಿಮ ತೀರ್ಮಾನವಾಗಿರುತ್ತದೆ. ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯ ದಿನಾಂಕವನ್ನು ನಿಗದಿಪಡಿಸಿದಾಗ ಪ್ರವೇಶ ಪತ್ರಗಳನ್ನು ಅಭ್ಯರ್ಥಿಗಳಿಗೆ ಅಂಚೆ ಮೂಲಕ ರವಾನಿಸಲಾಗುವುದು ಹಾಗೂ ಈ ಬಗ್ಗೆ ಮಾಹಿತಿಯನ್ನು ಆಯೋಗದ ವೆಬ್ ಸೈಟ್‌ನಲ್ಲಿ ಬಿತ್ತರಿಸಲಾಗುವುದು.

(ಬಿ) ಆಯಾ ಹುದ್ದೆಗಳಿಗೆ ಸಂದರ್ಶನ ದಿನಾಂಕ ನಿಗದಿಪಡಿಸಿ ಆಯೋಗದ ಅಂತರ್ಜಾಲ (Web Site)ದಲ್ಲಿ ಬಿತ್ತರಿಸಲಾಗುವುದು ಹಾಗೂ ಅರ್ಹ ಅಭ್ಯರ್ಥಿಗಳಿಗೆ ಸಂದರ್ಶನ ಪತ್ರಗಳನ್ನು Speed Post ಮುಖಾಂತರ ಕಳುಹಿಸಲಾಗುವುದು. ಅರ್ಹ ಅಭ್ಯರ್ಥಿಗಳಿಗೆ ಸಂದರ್ಶನ ಪತ್ರ ಸ್ವೀಕೃತವಾಗದಿದ್ದಲ್ಲಿ ಆಯೋಗವನ್ನು ಸಂಪರ್ಕಿಸ ಬಹುದು.

**14. ಆಯೋಗದೊಡನೆ ಪತ್ರ ವ್ಯವಹಾರ:**

ಆಯೋಗವು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ. ಸಂದರ್ಶನಕ್ಕೆ ಅನುಮತಿಸಲಾದ ಅಭ್ಯರ್ಥಿಯಾಗಿದ್ದರೆ ಸಂದರ್ಶನ ಪತ್ರದ ನಕಲನ್ನು ನೀಡಲಾಗುವುದು.

ವಿಳಾಸ ಬದಲಾವಣೆ ಇದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ಆಯೋಗದ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಆಯೋಗವು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಆಯೋಗವು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು. ಅಭ್ಯರ್ಥಿಗಳು ಆಯೋಗದೊಡನೆ ಸಂಪರ್ಕಿಸಲೇಬೇಕಾದ ಸಂದರ್ಭದಲ್ಲಿ ತಮ್ಮ ಮನವಿಯಲ್ಲಿ ಕೆಳಕಂಡ ಮಾಹಿತಿಗಳು ಒಳಗೊಂಡಿರಬೇಕು:–

(i) ಹುದ್ದೆಯ / ವಿಷಯದ ಹೆಸರು

(ii) ಅಭ್ಯರ್ಥಿಯ ಪೂರ್ಣ ಹೆಸರು (ಬಿಡಿ ಅಕ್ಷರಗಳಲ್ಲಿ)

(iii) ಅರ್ಜಿಯಲ್ಲಿ ನಮೂದಿಸಿರುವ ಅಂಚೆ ವಿಳಾಸ

**15. ಪ್ರಾಮುಖ್ಯವಾದ ಸೂಚನೆಗಳು:–**

ಅಭ್ಯರ್ಥಿಯ ಇತ್ತೀಚಿನ ಪಾರ್ಸ್ ಪೋರ್ಟ್ ಅಳತೆಯ ಭಾವಚಿತ್ರವನ್ನು ಒಂದು ಹಾಳೆಯ ಮೇಲಿಟ್ಟು ಅದರ ಕೆಳಗೆ ಕಪ್ಪು ಶಾಹಿಯ ಸ್ಕೆಚ್/ಮಾರ್ಕರ್ ಪೆನ್‌ಲ್ಲಿ ಸಹಿಯನ್ನು ಮಾಡಿ ಇದನ್ನು ಸ್ಕ್ಯಾನ್ ಮಾಡಿ ಅರ್ಜಿಗೆ **UPLOAD** ಮಾಡಬೇಕು. ಈ ಕೆಳಕಂಡ ಪ್ರಮಾಣ ಪತ್ರಗಳನ್ನು ನಿಗದಿತ ನಮೂನೆಯಲ್ಲಿ ON LINE ಮೂಲಕ ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಕೋರಿರುವ ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಇತರೆ ಪ್ರಮಾಣ ಪತ್ರಗಳನ್ನು ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಅದೇ ಮೀಸಲಾತಿ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಪರಿಶೀಲನೆಗೆ ಹಾಜರುಪಡಿಸಬೇಕು. ಇತರೆ ನಮೂನೆಗಳಲ್ಲಿ ಅಥವಾ ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಪಡೆದ ಯಾವುದೇ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ. ತಪ್ಪಿದ್ದಲ್ಲಿ ಇವರ ಮೀಸಲಾತಿಯನ್ನು /ಅಭ್ಯರ್ಥಿತ್ವವನ್ನು ಅನರ್ಹಗೊಳಿಸಲಾಗುವುದು.

1) ಹುದ್ದೆಗೆ ನಿಗದಿಪಡಿಸಿದ ಶುಲ್ಕ(ಅರ್ಜಿಯನ್ನು ಭರ್ತಿ ಮಾಡಿದ ನಂತರ ಪಾವತಿಸತಕ್ಕದ್ದು) ಪಾವತಿ ರಸೀತಿ.

2) ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ /ಸೆಮಿಸ್ಟರ್‌ಗಳ ಅಂಕಪಟ್ಟಿಗಳು ಹಾಗೂ ಘಟಿಕೋತ್ಸವದ ಪ್ರಮಾಣ ಪತ್ರಗಳು / ಗ್ರೇಡ್‌ನ್ನು ಶೇಕಡವಾರು ಅಂಕಗಳಿಗೆ ಪರಿವರ್ತಿಸಿದ ಪ್ರಮಾಣ ಪತ್ರ

3) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ /ವರ್ಗಾವಣೆ ಪ್ರಮಾಣ ಪತ್ರ / ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ.

4) ನಿರಾಪೇಕ್ಷಣಾ ಪತ್ರ. (ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳಿಗೆ)

5) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ / ಮಾಜಿ ಸೈನಿಕ ಅವಲಂಬಿತರಾಗಿದ್ದಲ್ಲಿ, ಮಾಜಿ ಸೈನಿಕರು ಬಿಡುಗಡೆ ಹೊಂದಿರುವ ಕಾರಣಗಳ ಪ್ರಮಾಣ ಪತ್ರ (ಮಾಜಿ ಸೈನಿಕರು ಸೇವೆಯಲ್ಲಿರುವಾಗ ಮೃತಪಟ್ಟಿದ್ದಲ್ಲಿ ಅಥವಾ ಖಾಯಂ ಆಗಿ ಗಾಯಗೊಂಡಿರುವ ಪ್ರಮಾಣ ಪತ್ರ) (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)

